ಸದನದಲ್ಲಿ ಉತ್ತರಿಸುವ

# **ಕರ್ನಾಟಕ ವಿಧಾನ ಪರಿಷತ್ತು**

ನೂರ ಮೂವತ್ತೆಂಟನೆಯ ಅಧಿವೇಶನ

ಶುಕ್ರವಾರ, ದಿನಾಂಕ : 26ನೇ ಜುಲೈ, 2019

ಮಾಹಿತಿ ತಂತ್ರಜ್ಞಾನ ಕಾಯಿದೆಯ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) -

141 (737) ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಕಳೆದ 5 ವರ್ಷಗಳಲ್ಲಿ ಮಾಹಿತಿ ತಂತ್ರಜ್ಞಾನ ಕಾಯ್ದೆಯ ಅಡಿಯಲ್ಲಿ ದಾಖಲು ಮಾಡಿರುವ ಪ್ರಕರಣಗಳ ಸಂಖ್ಯೆ ಎಷ್ಟು ;

(ಆ) ಮಾಹಿತಿ ತಂತ್ರಜ್ಞಾನ ಕಾಯ್ದೆ 68 ಎ ಯ ಅನ್ವಯ ಎಷ್ಟು ಪ್ರಕರಣಗಳನ್ನು ದಾಖಲಿಸಲಾಗಿದೆ ; ಪ್ರಸ್ತುತ ಈ ಪ್ರಕರಣಗಳು ಯಾವ ಹಂತದಲ್ಲಿವೆ ;

24/3/2015ರ ಬಳಿಕ ಈ ಕಾಯ್ದೆಯ ಅನ್ವಯ ದಾಖಲಾದ ಪ್ರಕರಣಗಳ ಸ್ಥಿತಿಗತಿಗಳೇನು ;

(ಇ) 24/3/2015ರ ಬಳಿಕ ಮಾಹಿತಿ ತಂತ್ರಜ್ಞಾನ ಕಾಯ್ದೆಯ ಅನ್ವಯ ಎಷ್ಟು ಪ್ರಕರಣಗಳನ್ನು ದಾಖಲಿಸಲಾಗಿದೆ ; ಯಾವ ಸೆಕ್ಷನ್‌ಗಳ ಅಡಿಯಲ್ಲಿ ದಾಖಲಿಸಲಾಗಿದೆ ; (ಪ್ರಕರಣವಾರು ಮಾಹಿತಿ ನೀಡುವುದು)

(ಈ) ಇತ್ತೀಚಿನ ದಿನಗಳಲ್ಲಿ ಕಳೆದ 6 ತಿಂಗಳಿನಿಂದ ಸಾಮಾಜಿಕ ಜಾಲತಾಣಗಳಲ್ಲಿ ಬರೆದಿರುವ ಮುಖ್ಯಮಂತ್ರಿ ಮತ್ತು ಸಚಿವ ಸಂಪುಟದ ಮತ್ರಿಗಳ ಕುರಿತು ವಿಡಂಬನೆ, ಅವಹೇಳನೆ ಮಾಡಿರುತ್ತಾರೆ ಎಂಬ ಕಾರಣಕ್ಕಾಗಿ ಎಷ್ಟು ಪ್ರಕರಣಗಳನ್ನು ದಾಖಲಿಸಲಾಗಿದೆ ; ಈ ಪ್ರಕರಣಗಳನ್ನು ಯಾವ ಯಾವ ಸೆಕ್ಷನ್‌ಗಳಡಿಯಲ್ಲಿ ದಾಖಲಿಸಲಾಗಿದೆ ; ಯಾರ ಯಾರ ವಿರುದ್ಧ ಪ್ರಕರಣ ದಾಖಲಾಗಿದೆ ; ಪ್ರಸ್ತುತ ಈ ಪ್ರಕರಣಗಳು ಯಾವ ಹಂತದಲ್ಲಿವೆ ? (ವಿವರ ನೀಡುವುದು)